# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : **1063 (1242)**

ಸದಸ್ಯರ ಹೆಸರು : ಶ್ರೀ ಯು.ಬಿ. ವೆಂಕಟೇಶ್ (ನಾಮ ನಿರ್ದೇಶನ ಹೊಂದಿದವರು)

ಉತ್ತರಿಸುವ ದಿನಾಂಕ : 15.03.2021

ಉತ್ತರಿಸುವ ಸಚಿವರು : ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು.

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಶಿಕ್ಷಣ ಇಲಾಖೆಯಲ್ಲಿ ಕೆಲವು ಬೋಧಕೇತರರು ಮುಂಬಡ್ತಿಗೆ ಅರ್ಹರಿಲ್ಲದಿದ್ದರೂ ಸುಳ್ಳು ಮಾಹಿತಿ ಅಥವಾ ದಾಖಲೆಗಳನ್ನು ಒದಗಿಸಿ ಮುಂಬಡ್ತಿ ಪಡೆಯುವ ಮೂಲಕ ಸರ್ಕಾರಕ್ಕೆ ನೂರಾರೂ ಕೋಟಿ ನಷ್ಟ ಉಂಟು ಮಾಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಸಾರ್ವಜನಿಕ ಶಿಕ್ಷಣ ಇಲಾಖೆಯಲ್ಲಿ ಪ್ರಥಮ ದರ್ಜೆ ಸಹಾಯಕರ ಹುದ್ದೆಯಿಂದ ಅಧೀಕ್ಷಕರ ಹುದ್ದೆಗೆ ಪರಿಶಿಷ್ಟ ಪಂಗಡದ ಜಾತಿಗೆ ಸೇರಿದವರೆಂದು ದಾಖಲೆಯನ್ನು ನೀಡಿ ಬಡ್ತಿಯನ್ನು ಪಡೆದಿರುತ್ತಾರೆ. |
| ಆ) | ಬಂದಿದ್ದಲ್ಲಿ, ಇವರುಗಳ ವಿರುದ್ಧ ಜರುಗಿಸಲಾಗಿರುವ ಕ್ರಮಗಳೇನು? (ಹೆಸರು, ಹುದ್ದೆ, ಕೆಲಸದ ಸ್ಥಳದ ಪೂರ್ಣ ಮಾಹಿತಿಯೊಂದಿಗೆ ವಿವರ ನೀಡುವುದು). | ಶ್ರೀಮತಿ ಎಂ. ಮಹಾಲಕ್ಷ್ಮೀ, ಪ್ರಥಮ ದರ್ಜೆ ಸಹಾಯಕರು, ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿ, ಬೆಂಗಳೂರು ಇವರು ಪರಿಶಿಷ್ಟ ಪಂಗಡಕ್ಕೆ ಸೇರಿದವರೆಂದು ಅವರಿಗೆ ಪೂರ್ವಾನ್ವಯವಾಗಿ ಅಧೀಕ್ಷಕರ ಹುದ್ದೆಗೆ ಮುಂಬಡ್ತಿ ನೀಡಲು ಕೋರಿ ಕರ್ನಾಟಕ ರಾಜ್ಯ ಅನುಸೂಚಿತ ಜಾತಿಗಳು ಮತ್ತು ಅನುಸೂಚಿತ ಬುಡಕಟ್ಟುಗಳ ಆಯೋಗ, ಬೆಂಗಳೂರು ಇಲ್ಲಿ ಪ್ರಕರಣ ಸಂಖ್ಯೆ:726/2016ರಂತೆ ದಾಖಲಿಸಿದ್ದು, ಸದರಿ ಪ್ರಕರಣದಲ್ಲಿ ಆಯೋಗವು ನೀಡಿದ ತೀರ್ಪಿನ ಹಿನ್ನೆಲೆಯಲ್ಲಿ ಇವರಿಗೆ ದಿನಾಂಕ:03.12.2016ರಂದು ಭವಿಷ್ಯಾವರ್ತಿಯಾಗಿ ಜಾರಿಗೆ ಬರುವಂತೆ ಅಧೀಕ್ಷಕರ ಹುದ್ದೆಗೆ ಬಡ್ತಿ ನೀಡಲಾಗಿರುತ್ತದೆ. ಸದರಿ ನೌಕರರು 1986ರಂದು ಸರ್ಕಾರದ ಸೇವೆಗೆ ಆಯ್ಕೆ ಹೊಂದುವ ಸಂದರ್ಭದಲ್ಲಿ ಪರಿಶಿಷ್ಟ ಪಂಗಡದ ಅಡಿಯಲ್ಲಿ ನೇಮಕಾತಿ ಹೊಂದಿಲ್ಲದೆ ಇರುವುದರಿಂದ, ಈ ರೀತಿ ಕ್ಲೇಮ್ ಅನ್ನು ಸೇವೆಗೆ ಸೇರಿದ ನಂತರ ಸಲ್ಲಿಸಿರುವುದರಿಂದ ಇವರಿಗೆ 1992 ರಿಂದ ಪೂರ್ವಾನ್ವಯವಾಗಿ ಈ ಸೌಲಭ್ಯ ನೀಡಲು ಅವಕಾಶವಿರುವುದಿಲ್ಲವೆಂದು ತಿಳಿಸಿದ ಹಿನ್ನೆಲೆಯಲ್ಲಿ ಸದರಿ ನೌಕರರಿಗೆ ಪ್ರಥಮ ದರ್ಜೆ ಸಹಾಯಕರ ಹುದ್ದೆಯಿಂದ ಅಧೀಕ್ಷಕರ ಹುದ್ದೆಗೆ ಭವಿಷ್ಯಾವರ್ತಿಯಾಗಿ ನೀಡಿದ್ದ ಮುಂಬಡ್ತಿಯನ್ನು ಹಿಂಪಡೆಯಲಾಗಿರುತ್ತದೆ ಹಾಗೂ ಪ್ರಥಮ ದರ್ಜೆ ಸಹಾಯಕರ ಹುದ್ದೆಯಲ್ಲೇ ಮುಂದುವರೆಸಲಾಗಿರುತ್ತದೆ. ಇವರು ದಿನಾಂಕ: |

| | | |
|---|---|---|
| | | 30.06.2017ರಂದು ಸೇವೆಯಿಂದ ವಯೋ ನಿವೃತ್ತರಾಗಿರುತ್ತಾರೆ. ಇವರ ಪ್ರಕರಣವು ಪ್ರಸ್ತುತ ನ್ಯಾಯಾಲಯದಲ್ಲಿ ವಿಚಾರಣಾ ಹಂತದಲ್ಲಿ ಬಾಕಿ ಇರುತ್ತದೆ. |

**ಸಂಖ್ಯೆ: ಇಡಿ 23 ಎಸ್‌ಟಿಬಿ 2021**

(ಎಸ್.ಸುರೇಶ್‌ಕುಮಾರ್)
ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ
ಸಕಾಲ ಸಚಿವರು

6069 ANN-A15 (4)

(197)



ಕರ್ನಾಟಕ ಸರ್ಕಾರ

ಸಾರ್ವಜನಿಕ ಶಿಕ್ಷಣ ಇಲಾಖೆ ಆಯುಕ್ತರ ಕಛೇರಿ ನೃಪತುಂಗ ರಸ್ತೆ ಬೆಂಗಳೂರು-01

ಸಂಖ್ಯೆಸಿ5[1].ಪ್ರದಸ.ಮುಂಬಡ್ತಿ/09/2015-16 ದಿನಾಂಕ:09-06-2017

## ಜ್ಞಾಪನ

ವಿಷಯ:- ಶ್ರೀಮತಿ ಎಂ.ಮಹಾಲಕ್ಷ್ಮಿ, ಅಧೀಕ್ಷಕರು, ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿ, ಮಲ್ಲೇಶ್ವರಂ, ಬೆಂಗಳೂರು ಇವರಿಗೆ ಭವಿಷ್ಯಾವರ್ತಿಯಾಗಿ ನೀಡಲಾಗಿದ್ದ ಬಡ್ತಿ ಆದೇಶವನ್ನು ಹಿಂಪಡೆಯುವ ಬಗ್ಗೆ.

ಉಲ್ಲೇಖ:- 1. ಸರ್ಕಾರದ ಪತ್ರ ಸಂಖ್ಯೆ : ಇಡಿ 131 ಎಲ್ಐಬಿ 2016 ದಿನಾಂಕ : 28-03-2017

2. ಈ ಕಛೇರಿ ಸಮ ಸಂಖ್ಯೆ ಅಧಿಸೂಚನೆ ದಿನಾಂಕ: 03-12-2016

********

ಉಲ್ಲೇಖ(1)ರ ಸರ್ಕಾರದ ಪತ್ರದಲ್ಲಿ ಶ್ರೀಮತಿ ಎಂ.ಮಹಾಲಕ್ಷ್ಮಿ, ಪ್ರಥಮ ದರ್ಜೆ ಸಹಾಯಕರು, ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿ, ಮಲ್ಲೇಶ್ವರಂ, ಬೆಂಗಳೂರು ಇವರು 1986ರಂದು ಸರ್ಕಾರದ ಸೇವೆಗೆ ಆಯ್ಕೆ ಹೊಂದುವ ಸಂದರ್ಭದಲ್ಲಿ ಪರಿಶಿಷ್ಟ ಪಂಗಡದ ಅಡಿಯಲ್ಲಿ ನೇಮಕಾತಿ ಹೊಂದಿರುವುದಿಲ್ಲ. ಆ ರೀತಿ ಕ್ಲೇಮ್ ಅನ್ನು ಸೇವೆಗೆ ಸೇರಿದ ನಂತರ ಸಲ್ಲಿಸಿರುವುದರಿಂದ ಇವರಿಗೆ 1992 ರಿಂದ ಪೂರ್ವಾನ್ವಯವಾಗಿ, ಈ ಸೌಲಭ್ಯ ನೀಡಲು ಅವಕಾಶವಿರುವುದಿಲ್ಲವೆಂದು ತಿಳಿಸಿರುತ್ತಾರೆ. ಈ ಹಿನ್ನೆಲೆಯಲ್ಲಿ ಶ್ರೀಮತಿ ಎಂ.ಮಹಾಲಕ್ಷ್ಮಿ ರವರಿಗೆ ಪ್ರಥಮ ದರ್ಜೆ ಸಹಾಯಕರ ಹುದ್ದೆಯಿಂದ ಅಧೀಕ್ಷಕರ ಹುದ್ದೆಗೆ ಭವಿಷ್ಯಾವರ್ತಿಯಾಗಿ ನೀಡಿದ ಉಲ್ಲೇಖ(2)ರ ಈ ಕಛೇರಿಯ ಅಧಿಸೂಚನೆಯನ್ನು ಹಿಂಪಡೆಯಲಾಗಿದೆ.

ಅದರಂತೆ ಸದರಿಯವರಿಗೆ ಅಧೀಕ್ಷಕರ ಹುದ್ದೆಯಲ್ಲಿ ಕರ್ತವ್ಯಕ್ಕೆ ಹಾಜರಾದ ದಿನಾಂಕದಿಂದ ಬಡ್ತಿ ವೇತನ ಶ್ರೇಣಿಯಲ್ಲಿ ನೀಡಲಾದ ವೇತನ ಹಾಗೂ ಇತರೆ ಭತ್ಯೆಗಳನ್ನು ನಿಯಮಾನುಸಾರ ಕಟಾಯಿಸಿ ಸಂಬಂಧಿಸಿದ ಲೆಕ್ಕಶೀರ್ಷಿಕೆಗೆ ಜಮಾ ಮಾಡಿ ಈ ಕಛೇರಿಗೆ ವರದಿ ಮಾಡಲು ಕ್ರಮ ವಹಿಸುವುದು.

(ಮಾನ್ಯ ಆಯುಕ್ತರ ಆದೇಶದ ಮೇರೆಗೆ)

(ಎಸ್.ಕಾತ್ಯಾಯಿನಿ ದೇವಿ)
ಜಂಟಿ ನಿರ್ದೇಶಕರು(ಆಡಳಿತ)

ಗೆ,

1. ನಿರ್ದೇಶಕರು, ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿ, ಮಲ್ಲೇಶ್ವರಂ, ಬೆಂಗಳೂರು ರವರಿಗೆ ಮುಂದಿನ ಕ್ರಮಕ್ಕಾಗಿ.
2. ಶ್ರೀಮತಿ ಎಂ.ಮಹಾಲಕ್ಷ್ಮಿ, ಪ್ರಥಮ ದರ್ಜೆ ಸಹಾಯಕರು, ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿ, ಮಲ್ಲೇಶ್ವರಂ, ಬೆಂಗಳೂರು.

ಪ್ರತಿಯನ್ನು:-

1. ಮಹಾಲೇಖಪಾಲರು(ಎ&ಇ), ಕರ್ನಾಟಕ ರಾಜ್ಯ, ಬೆಂಗಳೂರು ರವರಿಗೆ ಸಲ್ಲಿಸಿದೆ.
2. ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು, ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ, ಬಹುಮಹಡಿಗಳ ಕಟ್ಟಡ, ಬೆಂಗಳೂರು ರವರಿಗೆ ಸಲ್ಲಿಸಿದೆ.
3. ಕಛೇರಿ ಪ್ರತಿ.